## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 415
ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ.
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 18.02.2022.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಒಂದು ತಿಂಗಳ ಅವಧಿಯಲ್ಲಿ ಪ್ರಯಾಣಿಕರೊಂದಿಗೆ ಚಲಿಸುತ್ತಿದ್ದ ಎರಡು ಬಸ್ಸುಗಳು ಬೆಂಕಿ ಅವಘಡಕ್ಕೆ ತುತ್ತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಬೆಂಕಿ ಅವಘಡಕ್ಕೆ ಒಳಗಾದ ಎರಡು ವಾಹನ ಹಾಗೂ ಸದರಿ ಮಾದರಿಯ ಇನ್ನಿತರ ವಾಹನಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಅವಘಡಕ್ಕೆ ಸೂಕ್ತ ಕಾರಣಗಳನ್ನು ಗುರುತಿಸಲು ಬೆಂ.ಮ.ಸಾ.ಸಂಸ್ಥೆಯ ವತಿಯಿಂದ ಈಗಾಗಲೇ ಅಧಿಕಾರಿಗಳ ತಂಡವೊಂದನ್ನು ರಚನೆ ಮಾಡಲಾಗಿರುತ್ತದೆ.<br>ಅಧಿಕಾರಿಗಳ ತಂಡವು ಸಲ್ಲಿಸಿರುವ ವರದಿಯ ಅನುಸಾರ, "ಸ್ಟಾರ್ಟರ್ ಡೈರೆಕ್ಟ್ ಆಗಿ ಎಲೆಕ್ಟ್ರಿಕ್ ಶಾರ್ಟ್ ಸರ್ಕ್ಯೂಟ್" ನಿಂದ ವಾಹನಗಳಲ್ಲಿ ಬೆಂಕಿ ಅವಘಡ ಸಂಭವಿಸಬಹುದೆಂದು ತಿಳಿಸಿರುತ್ತಾರೆ. |
| ಆ. | ಪ್ರಯಾಣಿಕರು ಇರುವ ನಗರ ಸಾರಿಗೆ ಬಸ್ಸುಗಳು ಹೀಗೆ ಮೇಲಿಂದ ಮೇಲೆ ಬೆಂಕಿ ಅವಘಡಕ್ಕೆ ಸಿಲುಕುತ್ತಿರುವ ಬಗ್ಗೆ ಸ್ಪಷ್ಟ ಕಾರಣಗಳನ್ನು ಗುರುತಿಸಲು ಸರಕಾರದಿಂದ ತನಿಖೆ ನಡೆಸಲು ಕ್ರಮ ಕೈಗೊಳ್ಳಲಾಗಿದೆಯೇ; | |
| ಇ. | ಹಾಗಿದ್ದಲ್ಲಿ ತನಿಖಾ ವರದಿಯ ಪ್ರಕಾರ ಚಲಿಸುತ್ತಿದ್ದ ಬಸ್ಸುಗಳಲ್ಲಿ ಇದ್ದಕ್ಕಿದ್ದಂತೆ ಬೆಂಕಿ ಹತ್ತಿಕೊಳ್ಳಲು ಕಾರಣಗಳೇನು; | |
| ಈ. | ಈ ರೀತಿ ಘಟನೆಗಳು ಪುನರಾವರ್ತನೆಯಾಗದಂತೆ ಮತ್ತು ಬಿ.ಎಂ.ಟಿ.ಸಿ ಬಸ್ಸುಗಳಲ್ಲಿ ಸುರಕ್ಷತೆ ಬಗ್ಗೆ ಸಾರ್ವಜನಿಕರಲ್ಲಿ ಶಂಕೆ ಉಂಟಾಗದಂತೆ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಈ ರೀತಿ ಬೆಂಕಿ ಅವಘಡಗಳನ್ನು ತಡೆಗಟ್ಟಲು ಹಾಗೂ ಪ್ರಯಾಣಿಕರ ಸುರಕ್ಷತೆಗೆ ಯಾವುದೇ ಶಂಕೆ ಉಂಟಾಗದಂತೆ ಆಚರಣೆ ಮಾಡಲು ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿರುತ್ತದೆ:<br>ಬೆಂಕಿ ಅವಘಡಕ್ಕೆ ಒಳಗಾದ ಮಾದರಿಯ ಎಲ್ಲಾ ವಾಹನಗಳನ್ನು ಕೂಡಲೇ ಆಚರಣೆಯಿಂದ ಹಿಂಪಡೆಯಲಾಗಿರುತ್ತದೆ. ಸದರಿ ಮಾದರಿಯ ವಾಹನಗಳನ್ನು ಸಂಸ್ಥೆಯ ಅಧಿಕಾರಿಗಳು ಹಾಗೂ ವಾಹನಗಳ ತಯಾರಕ ಕಂಪನಿಯ ಪ್ರತಿನಿಧಿಗಳೊಂದಿಗೆ ವಿದ್ಯುತ್ ಸಂಬಂಧಿತ ಸಮಗ್ರವಾದ ತಪಾಸಣೆಗೆ ಒಳಪಡಿಸಲಾಗುತ್ತಿದೆ. ಪ್ರಸ್ತುತ ಸದರಿ ವಾಹನಗಳ ವಿದ್ಯುತ್ ದೋಷ ತಪಾಸಣೆ ಮತ್ತು ತಾಂತ್ರಿಕ ದುರಸ್ತಿಗೆ ಸಂಬಂಧಿಸಿದ ಕಾರ್ಯಗಳು ಪ್ರಗತಿಯಲ್ಲಿದೆ. |

ಸಂಖ್ಯೆ: ಟಿಡಿ 27 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು